# ವೇಣಿ ಪುಷ್ಪ



ಸೌ. ಪಾರ್ವತಿದೇವಿ ಹೆಗಡೆ.



ಕನ್ನಡ ಕೋಟೆ ಪ್ರಕಾಶನ ಸೊಲ್ಲಾಪೂರ.

# ಅರ್ಪಣ





ಪೂಜ್ಯ ಪತಿ, ಶ್ರೀ ವ್ಹಿ. ಆರ್. ಹೆಗಡೆ ಇವರಿಗೆ,

ನಿಮ್ಮ ಕಾರುಣ್ಯದಲಿ ವಿಕಸಿಸಿತು ನನ್ನ ಮನ
ನಿಮ್ಮೊಲವು ಬೆಳಗಿಸುವದೆನ್ನ ಮತಿಯ
ನನ್ನೊಳೇನಿದೆ ಮುಡುಪು? ಕೊಳ್ಳುವಿರ ದಯೆಯಿಂದ
ನಿಮ್ಮಡಿಗಳಲ್ಲಿಡುವೆನಲ್ಪಕೃತಿಯ?

ಪಾರ್ವತಿದೇವಿ

# ಮುನ್ನುಡಿ

ಶ್ರೀಮತಿ ಸೌ. ಪಾರ್ವತಿದೇವಿ ಹೆಗಡೆಯವರ ಮೊದಲ ಕವನ ಸಂಗ್ರಹ **ವೇಣಿ ಪುಷ್ಪ** ಈಗ ಪ್ರಕಟವಾಗುತ್ತಿದೆ. ಸೌ. ಪಾರ್ವದೇವಿ ಯವರು ಸರಸ್ವತಿಗೆ ಏರಿಸಿದ ಪುಷ್ಪ ಆ ವೇಣಿಯಲ್ಲಿ ಅಲಂಕಾರವಾಗಿ ಉಳಿದು ಮತ್ತೆ ಮರಳಿ ಪ್ರಸಾದವಾಗಿ ಅವರಿಗೆ ದೊರೆತು ಅವರಿಂದ ಬೇರೆ ಕೃತಿಗಳನ್ನು ಮುಂದೆ ತರುವಂತೆ ಮಾಡಲಿ ಎಂದು ಅದೇ ಸರಸ್ವತಿಯ ಅಡಿಯಲ್ಲಿ ನಾನು ಪ್ರಾರ್ಥಿಸುತ್ತೇನೆ.

ಸೌ. ಪಾರ್ವತಿದೇವಿಯವರು ನಮ್ಮ ಪಶ್ಚಿಮ ಕರಾವಳಿಯ ನಾಡಿನವರು. ತಮ್ಮ ಯಜಮಾನರೊಡನೆ ಕನ್ನಡ ನಾಡನ್ನು ಸ್ವಲ್ಪ ಸುತ್ತಾಡಿದ್ದಾರೆ. ಇತ್ತೀಚೆ ಬದರಿ ಕೇದಾರದವರೆಗೂ ಯಾತ್ರೆ ಬೆಳಸಿ ಬಂದಿದ್ದಾರೆ ಇಂದಿನ ಕನ್ನಡದ ಚಟುವಟಿಕೆಗಳಲ್ಲಿ ಅವರು ಅಂತಃಕರಣಪೂರ್ವಕವಾಗಿ ಭಾಗವಹಿಸುವರು ಜೀವನದಲ್ಲಿ ಯಾವಾವುದು ಸುಂದರವೊ ಆದರಣೀಯವೊ ಅಲ್ಲಲ್ಲಿ ಪೂಜ್ಯ ಭಾವವನ್ನು ಅವರು ತಳಿದಿದ್ದಾರೆ. ಸ್ವಭಾವದಲ್ಲಿಯೇ ಸಾಹಿತ್ಯದ ಒಲವಿರುವದರಿಂದ ಅವರು ಮಾಡಿಕೊಂಡಷ್ಟು ಓದಿನಲ್ಲಿಯೇ ಅವರಿಗೆ ಈ ಬಗೆಯ ಕವಿತಾಶಕ್ತಿ ಒಲಿದಿರುವದು ಸಾಧ್ಯವಾಗಿರುವದು ಅವರ ಪುಣ್ಯಾಂಶ.

ಈ ಸಂಗ್ರಹದಲ್ಲಿ ಎರಡು ಮೂರು ಕವನಗಳನ್ನು ಬಿಟ್ಟರೆ ಉಳಿದವೆಲ್ಲ ಅವರ ಸ್ವಂತರಚನೆ ಭಾಷಾಂತರಗಳು ಈಗಿದ್ದ ರೂಪದಲ್ಲಿಯೂ ಚೆನ್ನಾಗಿವೆ. ಇದು ಅವರ ಮೊದಲನೆಯ ಕವನಸಂಗ್ರಹವಾಗಿರುವದರಿಂದ ಕೆಲವು ತೀರ ಪ್ರಾರಂಭದ ರಚನೆಯ ಪ್ರಕಾರಗಳು ಇದರಲ್ಲಿ ಸ್ಥಾನ ಪಡೆದಿವೆ. ಆದರೆ ಅವುಗಳೊಡನೆ ಉತ್ತಮವಾದ ಕವನಗಳೂ ಸೇರಿಕೊಂಡಿವೆ. ಅವರ ನೋಟ ಸ್ತ್ರೀಯರಿಗೆ ಸಹಜವಾದ ಸೌಲಭ್ಯದಿಂದ ಒಡಗೂಡಿದೆ. ರಚನೆ ಸಹಜವಾಗಿದೆ. ಪ್ರಸಾದ ಅದರ ಮುಖ್ಯಗುಣ. ಅವರ ಉತ್ಕಟ ಉದ್ಗಾರಗಳಲ್ಲಿಯೂ

ಒಂದು ಬಗೆಯ ಪ್ರಸನ್ನತೆ ಇದೆ. ಅವರ ಮುಖ್ಯ ಒಲವು ಧಾರ್ಮಿಕ ವೃತ್ತಿಯಲ್ಲಿ ಕಂಡುಬರುವ ಭಕ್ತಿಭಾವದ ಜಾತಿಯದು ಎಂದು ಹೇಳಬೇಕಾದೀತು. ಆದರೂ ಅವರಲ್ಲಿ ಬುದ್ಧಿಯ ಕಸುವು ತಕ್ಕಷ್ಟಿದೆ. ಅವರ ನೋಟದ ವಿಶಾಲತೆ "**ಸಂಶಯುವೆ**" "**ತಂಗಿಗೆ**" "**ಅಹಲ್ಯೆ**" "**ಸತ್ಯಕಾಮ**" ಇವೇ ಮೊದಲಾದ ಕವನಗಳಲ್ಲಿ ಕಂಡುಬರುವದು. **ನಿಸರ್ಗ ಪ್ರೀತಿ** "**ಜೆಳ್ಳಿಗೆ**" "**ಬದರಿಕಾಶ್ರಮದಲ್ಲಿ ಒಂದು ಬೆಳಗು**" "**ನಿಸರ್ಗ**" ಈ ಕವನಗಳಲ್ಲ ತೋರುವದು. ಉಳಿದ ಅನೇಕ ಕವನಗಳಲ್ಲಿ ಅವರುಕಂಡ ಅನೇಕ ಸ್ಥಳ, ವ್ಯಕ್ತಿಗಳ ಸಂಪರ್ಕದಿಂದ ಉಂಟಾದ ಭಾವನೆ ಉದ್ರೇಕಿತವಾಗಿ ಪ್ರಕಟಿತವಾಗುವದು. ಇಲ್ಲಿಯ ಕವನಗಳಲ್ಲಿಯ ಮೇಲ್ಬಗೆಯ ತಿರುಳು "**ಹೂವು**" "**ಬದರಿಕಾಶ್ರಮದಲ್ಲಿ ಒಂದು ಬೆಳಗು**" ಈ ಕವನಗಳಲ್ಲಿ ಎದ್ದು ಕಾಣುವದು. ಅಂತೂ ಒಟ್ಟಿನಲ್ಲಿ ಇಲ್ಲಿಯ ಕವನಗಳ ಜಾತಿ ಪ್ರಾರ್ಥನಾ ಜಾತಿ. ಇವರ ಈ ಪ್ರಾರ್ಥನೆಗಳ ಫಲವಾಗಿ ಅವರ ಅಂತಃಕರಣ ಮಾಗಿ ರಸರೂಪವಾಗಿ ಮುಂದಿನ ಕವನಗಳಲ್ಲಿ ಸಂಗ್ರಹವಾಗುವದು ಎಂದು ನಾನು ನಂಬುತ್ತೇನೆ.

ಸೀಲಾನಗರ ಸೊಲ್ಲಾಪೂರ.
ತಾ. ೧೩-೧೨-೫೩ } ಪ್ರೊ. ದ. ರಾ. ಬೇಂದ್ರೆ.

# ಎರಡು ಮಾತು

ಬೆಳಕಿಂಡಿಯಿಂದ ಬಾನನ್ನು ನೋಡಿ ಅದರ ಚಿತ್ತರವನ್ನು ಅರಿತು ಕೊಂಡೆ ಎಂದು ಹೇಳುವದು ಧಾರ್ಷ್ಟ್ಯದ ಮಾತು. ಆದರೆ ಕಲ್ಪನಾ ಜೀವಿಗೆ ಒಳಗಣ್ಣಿನಿಂದ ನೋಡುವದು ಸಾಧ್ಯವಿದೆ. ಅವರೇ ಪ್ರತಿಭಾಶಾಲಿಗಳು. ನಾನು ಅತಂಹ ಪ್ರತಿಭಾಶಾಲಿ ಎಂದು ಎಳ್ಳಷ್ಟೂ ನಾನು ತಿಳಿದುಕೊಂಡಿಲ್ಲ. ಆದರೂ ನನ್ನ ಅಂತಃಕರಣ ಕರಗಿದಾಗ, ಹೃದಯದಲ್ಲಿ ಅಲ್ಲೋಲ ಕಲ್ಲೋಲವಾದಾಗ ಒಂದ ಭಾವನೆಗಳನ್ನು ಈ ಕವನಗಳಲ್ಲಿ ಕುರಿಸುವ ಅಲ್ಪ ಪ್ರಯತ್ನವನ್ನು ಮಾಡಿದ್ದೇನೆ. ಸಹೃದಯರು ಈ ನನ್ನ ಮೊದಲ ಪ್ರಯತ್ನವನ್ನು ಸಹಾನುಭೂತಿಯಿಂದ ಕಾಣುವರೆಂದು ಆಶಿಸುತ್ತೇನೆ.

ಈ ಕವನಸಂಗ್ರಹದಲ್ಲಿ ನಾನು ಆಗಾಗ ಬರೆದ ಹಲವು ಕವನಗಳಲ್ಲಿ ೩೦ ಕವನಗಳನ್ನು ಮಾತ್ರ ಪವಣಿಸಿದ್ದೇನೆ. **'ವೇಣಿ ಪುಷ್ಪ' 'ಮಗುವಿನೊಡನೆ' 'ಪ್ರಾರ್ಥನೆ'** ಇವು ಮೂರು ಗುರುದೇವ ರವೀಂದ್ರರ ರಸಗವನಗಳ ಭಾವಾನುವಾದ. ಉಳಿದವುಗಳು ಸ್ವತಂತ್ರ ಭಾವಗೀತೆಗಳು. ಸಾಮಾನ್ಯವಾಗಿ ಎಲ್ಲ ಕವನಗಳನ್ನು ಅವುಗಳನ್ನು ಬರೆದ ಕಾಲಾನುಕ್ರಮವಾಗಿ ಹಾಕಲಾಗಿದೆ. ಇದರಲ್ಲಿಯ ಕೆಲವು ಕವನಗಳು ಈಗಾಗಲೇ ಪತ್ರಿಕೆಯಲ್ಲಿ ಬೆಳಕು ಕಂಡಿವೆ. ಅದಕ್ಕೆ ಕಾರಣರಾದ ಸಂಪಾದಕರಿಗೂ ಹಾಗೂ ಈ ಕೃತಿಯನ್ನು ತಮ್ಮ ಗ್ರಂಥಾಲಯದಲ್ಲಿ ಪ್ರಕಟಿಸಿದ ಕನ್ನಡ ಕೋಟಿಯವರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಶ್ರೀ ಜಯದೇವಿ ತಾಯಿ ಸಂಪಿಗೆಯ ಮರವಿದ್ದಂತೆ. ಅವರ ಆಸರದಿಂದ ನನ್ನ ಸಾಹಿತ್ಯಲತೆ ಬಹಳವಾಗಿ ಹಬ್ಬಲು ಅನುಕೂಲವಾಯಿತು ಅವರು ತಮ್ಮ ಸ್ನೇಹಾಂಬುಪೂರದಿಂದ ನನ್ನ ಕಾವ್ಯದ ಬಳ್ಳಿಯನ್ನು ಯಾವಾಗಲೂ ಹಸುರಿಡಲು ಯತ್ನಿಸುತ್ತಿದ್ದಾರೆ. ಅವರ ಉಪಕಾರವನ್ನು ನಾನು

ಸ್ಮರಿಸದಿದ್ದರೆ ನಾನು ಕರ್ತವ್ಯಚ್ಯುತಳಾದಂತಾದೀತು. ತಮ್ಮ ನೂರಾರು ಕೆಲಸಗಳನ್ನು ಬದಿಗಿಟ್ಟು ತಮ್ಮ ಅಮೋಲ್ಯ ಅಭಿಪ್ರಾಯವನ್ನು ದಯ ಪಾಲಿಸಿದ ಶ್ರೀಮತಿ ಜಯದೇವಿತಾಯಿಯವರಿಗೆ ನಾನು ಋಣಿಯಾಗಿದ್ದೇನೆ

ನನಗೆ ಅನೇಕ ಬಗೆಯಿಂದ ನೆರವು ನೀಡಿದ ಸೋದರಿ ಸರೋಜನಿ ಮಹಿಷಿಯರಿಗೆ ನಾನು ಋಣಿಯಾಗಿದ್ದೇನೆ.

ನನ್ನ ವಿನಂತಿಯನ್ನು ಮನ್ನಿಸಿ ಅಭಿಪ್ರಾಯವನ್ನು ನೀಡಿದ ಸೋದರ ಶ್ರೀ ಕೆ. ಈಶ್ವರನ್ ಇವರಿಗೆ ನಾನು ಕೃತಜ್ಞತೆಯನ್ನು ಸಲ್ಲಿಸದಿದ್ದರೆ ಅನ್ಯಾಯ ವಾದೀತು. ಅವರು ಅನೇಕ ಸೂಕ್ತಸಲಹೆಗಳಿಂದ ಪುಸ್ತಕದ ಅಂದವನ್ನು ಹೆಚ್ಚಿಸಿದ್ದಾರೆ. ಆತ್ಮೀಯತೆಯಿಂದ ನನ್ನನ್ನು ಕಂಡು ಮುನ್ನುಡಿಯ ಹರಿ ಕೆಯನ್ನು ನೀಡಿದ ಪೂಜ್ಯ ಬೇಂದ್ರೆಯವರಿಗೆ ನಾನು ಅತ್ಯಂತ ಋಣಿ ಯಾಗಿದ್ದೇನೆ. ಕೊನೆಯದಾಗಿ ಕಲಾಭಿರುಚಿಗೆ ಪ್ರೋತ್ಸಾಹಕರಾದ ಪೂಜ್ಯ ಪತಿ ಶ್ರೀ ವ್ಹಿ ಆರ್. ಹೆಗಡೆಯವರಿಗೆ ಬಹಳ ಋಣಿಯಾಗಿದ್ದೇನೆ.

ಈ ಪುಟ್ಟ ಪುಸ್ತಕಕ್ಕೆ ಇಷ್ಟು ಅರಿಕೆ ಸಾಕು ಇಲ್ಲದಿದ್ದರೆ ವೇಣಿ ಗಿಂತ ಪುಷ್ಪವೇ ದೊಡ್ಡದಾದೀತು.

ಸೊಲ್ಲಾಪೂರ,
೧೦-೧೨-೫೫

ಇತಿ
**ಸೌ. ಪಾರ್ವತಿದೇವಿ ಹೆಗಡೆ**

# ಪ್ರಕಾಶಕರ ಮಾತು

**"ವೇಣಿ ಪುಷ್ಪ"** ಕಾವ್ಯ ಸಂಗ್ರಹ ಬರೆದ ಸೌ. **ಪಾರ್ವತಿದೇವಿ** ಹೆಗಡೆಯವರ ಸ್ಥಳ **ಕಾರವಾರ** ಜಿಲ್ಲೆಯ ಕುಮಠ. ಸೋದರ ಶ್ರೀ ವ್ಹಿ. ಆರ್. ಹೆಗಡೆ, ಪೋಲಿಸ್ ಇನಸ್ಪೆಕ್ಟರ ಇವರ ಧರ್ಮಪತ್ನಿಯವರು. ಅವರು ಇಲ್ಲಿಗೆ ಒಂದು ಸುಮಾರು ಮೂರು ವರ್ಷಗಳಾದವು. ಅವರು ಬಂದ ಪ್ರಾರಂಭ ದಲ್ಲಿಯೇ ನಮ್ಮ ಪರಿಚಯವಾಯಿತು. ಕನ್ನಡ ನಾಡ ನುಡಿಯ ಏಳಿಗೆಗಾಗಿ ಶ್ರಮಿಸುವ ಒಂದು ದೊಡ್ಡ ಗುಣ ನಾನು ಇವರಲ್ಲಿ ಕಂಡೆ. ಕನ್ನಡ ಸಾಹಿತ್ಯ ದಲ್ಲಿ ಬಹಳೇ ಆಸಕ್ತಿಯುಳ್ಳವರಾಗಿದ್ದಾರೆ ಇವರ ವಕ್ತೃತ್ವಶೈಲಿಯೂ ಚೆನ್ನಾಗಿದೆ.

× × ×

ವಿವಿಧ ವಾಙ್ಮಯಗಳ ವ್ಯಾಸಂಗದಿಂದ ಇವರ ಕಲ್ಪನಾಶಕ್ತಿಗೆ ಜ್ಞಾನದ ನೆರವೂ ಸಿಕ್ಕಿದೆ. ತುಸು ಮಟ್ಟಿಗೆ ಸಂಸ್ಕೃತದ ಅಭ್ಯಾಸವಿದ್ದುದರಿಂದ ಸ್ವಾಭಾವಿಕವಾಗಿಯೆ ಇವರ ಒಲವು ಆಧ್ಯಾತ್ಮದತ್ತ ಚಿಗುರಿದೆ. ಆಂಗ್ಲ ಭಾಷೆಯಲ್ಲಿಯೂ ತುಸು ಪರಿಶ್ರಮವುಂಟು.

ಇವರ " ನಿಸರ್ಗದಲ್ಲಿ ಅಚಿಂತದರ್ಶನ " ಅಚ್ಚಾಗುತ್ತಲಿದೆ. ವೀರ ಮಾತೆಯಲ್ಲಿ "ವೀರಾಜೀವನ" ರಹಸ್ಯವನ್ನು ಕುರಿತು ಬರೆಯುತ್ತಿದ್ದಾರೆ.

ಒಂದು ದಿನ ಅವರು ತಾವು ಬರೆದ ಕಾವ್ಯಸಂಗ್ರಹವನ್ನು ನನಗೆ ತೋರಿಸಿದರು. ಅವುಗಳನ್ನೋದಿ ನನಗೆ ಬಹಳ ಸಂತೋಷವೆನಿಸಿ, 'ಇವು ಗಳನ್ನು ಅಚ್ಚುಹಾಕಿದರೆ ಒಳ್ಳೆಯದಲ್ಲವೆ ?' ಎಂದು ಕೇಳಿದೆ. ಅದಕ್ಕೆ ಅವರು ಸುಮ್ಮನಿದ್ದರು. ನಮ್ಮ **'ಕನ್ನಡ ಕೋಟೆ'** ಪ್ರಕಾಶನದ ಪರವಾಗಿ ಪ್ರಸಿದ್ಧಿ ಸುತ್ತೇವೆಂದು ಒತ್ತಾಯದಿಂದ ಕೇಳಿದಾಗ ಒಪ್ಪಿದ, ಸೌ|| ಪಾರ್ವತಿದೇವಿ ಹೆಗಡೆಯವರಿಗೆ ನಾವು ಕೃತಜ್ಞರಾಗಿದ್ದೇವೆ.

ತಮ್ಮ ಅಗತ್ಯವಾದ ಕಾರ್ಯಕಲಾಪಗಳಲ್ಲೂ ಬಿಡುವು ಮಾಡಿಕೊಂಡು ಮುನ್ನುಡಿ ಬರೆದುಕೊಟ್ಟ ಕವಿವರ್ಯ ಪ್ರೋ ದ. ರಾ. ಬೇಂದ್ರೆಯವರಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ.

'**ಕನ್ನಡ ಕೋಟೆ**' ಸಂಸ್ಥೆಯ ಸಂಸ್ಥಾಪಕರಾದ ಮಾತೃಶ್ರೀ ಜಯದೇವಿ ತಾಯಿ ಲಿಗಾಡೆಯವರು ಮತ್ತು ಸಂಗಮೇಶ್ವರ ಕಾಲೇಜಿನ ಪ್ರಿನ್ಸಿಪಾಲರಾದ ಸೋದರ ಶ್ರೀ ಕೆ. ಈಶ್ವರನ್ ಎಂ. ಎ. ಇವರು ಈ ಪ್ರಕಟನೆಯ ಕಾರ್ಯದಲ್ಲಿ ಪ್ರೋತ್ಸಾಹಿಸಿ, ಸೌಹಾರ್ದ ಸಹಕಾರವನ್ನಿತ್ತು ಅಭಿಪ್ರಾಯವನ್ನು ಬರೆದು ಕೊಟ್ಟದ್ದಕ್ಕಾಗಿ ನಾನು ತುಂಬ ಕೃತಜ್ಞಳು.

ಕೊನೆಯದಾಗಿ ಗಡಿನಾಡಿನ ಕನ್ನಡಿಗರ ಹಿತರಕ್ಷಣೆಗಾಗಿ ರೂಪಗೊಂಡಿರುವ ನಮ್ಮ ಕನ್ನಡ ಕೋಟೆಯ ಎರಡನೇಯ ಪ್ರಕಟನೆಯೂ ಓರ್ವ ಸೋದರಿಯ ಗೀತಸಂಗ್ರಹವಾದುದು ಅಭಿಮಾನದ ಸಂಗತಿಯಾಗಿದೆ ಗಡಿನಾಡ ಕನ್ನಡಿಗರ ಈ ಪ್ರಕಟನೆಯನ್ನೂ ಸೌಹಾರ್ದತೆಯಿಂದ ಸ್ವೀಕರಿಸುವದಾಗಿ ಕೋರುತ್ತೇನೆ.

ವಿಶೇಷ ಆಸ್ಥೆಯಿಂದ ಅಚ್ಚುಮಾಡಿರುವ ಮುದ್ರಣಾಲಯದ ಒಡೆಯರಾದ ಶ್ರೀ ಚಿಮ್ಮಲಗಿಯವರಿಗೂ ಮತ್ತು ಮುಖಪತ್ರದ ಅಂದವನ್ನು ಬೆಳೆಸಿ ಕೊಟ್ಟಿರುವ ಶ್ರೀ ಬಿ. ಆರ್. ಪಟಣೆ ಎಂ. ಎ. ಜಿ. ಡಿ. ಆರ್ಟ ಇವರಿಗೂ ಆಭಾರಿಯಾಗಿದ್ದೇನೆ

ಕನ್ನಡ ಕೋಟೆ ಸೊಲ್ಲಾಪೂರ
ತಾ. ೧೨-೧೨-೫೩ } ಸೌ|| ಶಶಿಕಲಾ ಮಡಕಿ.

## ಪರಿವಿಡಿ

# ವೇಣಿ ಪುಷ್ಪ

ಬಂದು ಹೋಗುವರೆ ಇಂತು ಪ್ರತಿದಿನವು
ಹೇಳೆ ಎದೆಯು ಗೆಳತಿ

ಹೋಗಿ ಮುಟ್ಟಿಸುವೆಯೇನೆ ಈ ವೇಣಿ
ಪುಷ್ಪವನ್ನು ಗೆಳತಿ ?

ಯಾರು ಕೊಟ್ಟರಿದ ಯಾವ ಮಧುವನದ ,
ಪುಷ್ಪವೆಂದು ಕೇಳೆ

ಹೇಳದಿರು ಮತ್ತೆ ಬೇರೆ ಏನನ್ನು
ಕೇಳರೆನ್ನ ಆಣೆ

ವೃಕ್ಷದಡಿಯಲ್ಲಿ ಧೂಳ ಹಾಸಿನಲಿ
ಕುಳಿತುಕೊಳುವರೇನೆ ?

ಹೋಗು ತಡವೇಕೆ ? ಹಾಕು ಈ ಬಕುಲ
ಕುಸುಮಪೀಠವನ್ನೆ .

ಕರುಣ ಪೂರ್ಣ ಹೊಳೆಹೊಳೆವ ತನ್ನ ಚಲು
ನೇತ್ರಯುಗ್ಮದಿಂದ

ಹೊತ್ತಿಸಿಹರವರು ನನ್ನ ಮನದಲ್ಲಿ
ಜ್ಯೋತಿ ಪ್ರೀತಿಯಿಂದ

ಏನೊ ಎದೆವಾತ ಹೇಳಬೇಕೆಂಬ
ಆಸೆ ತುಡಿವುದವರ

ಆದರೇನನೂ ಯಾರಿಗೂನು ಸಹ
ಹೇಳದೇನೆ ಇಹರ

ಬಂದು ಹೋಗುವರೆ ಇಂತು ಪ್ರತಿದಿನವು
ಹೇಳೆ ಹೃದಯಸಖಿಯೇ

ಹೆಣ್ಣಿಗೆ ನುಟ್ಟಿಸುವೆಯೇನೆ ಕಾಣಿಕೆಯ
ಹೇಳು ಚಂದ್ರಮುಖಿಯೆ

# ಕೋಗಿಲೆ

ತಾನಗಾನಗಳಲ್ಲಿ ತಣಿಸಿಕೊಳುವದು ಮನವ
ಹಸುರೆಲೆಗಳಲಿ ಅಡಗಿಮುಡಗಿಕೊಂಡಿಹ ಕುಕಿಲಿ
ಕುಕಿಲುವದು ಋತುಪತಿಯ ಐಸಿರಿಯ ಈ ಘನವ
ಮೆದ್ದು ಮೆಲ್ಲಗೆ ಮುದದಿ ಮಾಮರದಿ ತಳಿತ ಎಲೆ

ಕಪ್ಪು ಬಣ್ಣವು ಎಂಬ ಕೊರಗು ಒಂದಿನಿತಿಲ್ಲ
ಕಸುವು ತನಗಿಲ್ಲೆಂಬ ಕಳವಳಕೆ ಎಡೆಯಿಲ್ಲ
ಇಂಚರವು ತನಗೆಂಬ ಬಿಂಕ ಒಂದಿನಿತಿಲ್ಲ
ಕೂಟಸ್ಥ ತಾಟಸ್ಥ್ಯ ಪರಪುಟ್ಟ ನಿನಗೆಲ್ಲ

ಹಿಗ್ಗಿ ಕೂಜನಗೈವ ಗಾನ ಋಷಿಯೇ ಹಾಡು
ತುಂಬಿರುವ ದುಗುಡವನು ಕಿತ್ತೆಸೆಯಲೀ ಹಾಡು
ಅಶುಭವೆಲ್ಲಕು ಕೊನೆಯು ಬರುವದೆಂಬುದನುಸುರು
ಮಂಗಲಸು ದಿವಸದಾ ಮಂಗಲವ ನೀನುಸುರು

ನಿನ್ನ ಗಾನದೊಳಿಹುದು ದಿವ್ಯತಮ ಮಾಧುರ್ಯ
ಅದಕೆ ಜೊತೆಯಾಗಿಹುದು ಗೂಢತಮ ಗಾಂಭೀರ್ಯ

# ಪ್ರಭುಲೋಕ

ಪ್ರಭುಲೋಕಕೆ ಸಾಗಿರುವದು
ಬಾಳ್‌ಬಳ್ಳಿಯ ಕುಡಿಯು
ಚಾಚಿರುವದು ಮೊಗಹೊರಳಿದ
ಅಪ್ಪಿದೆ ಗುರುವಿನಡಿಯು

ತಟಕಿಕ್ಕುತಲಿದೆ ಜೇನದು
ಕೊನೆಯೇ ಇಲ್ಲದಕೆ
ಘಮಘಮಿಸುತಲಿವೆ ಹೂಗಳು
ಬಾಡುವದಿಲ್ಲದಕೆ

ದೂರದಲಿದೆ ಆಗಸದೆಡೆ
ಆದರು ಎದೆಯಿಹುದು
ಗುರು ಕರುಣೆಯ ಪರ್ಜನ್ಯವು
ಸೊನೆ ಸುರಿಸುತಲಿಹುದು

ತಿಳಿ ಬೆಳಕಿದೆ ಅಮರತೆಯಿದೆ
ಶಾಶ್ವತ ಪ್ರಭುಲೋಕ
ಸತ್ಯದ ಸೆಲೆ ನಿತ್ಯದ ನೆಲೆ
ಬೆಳಗುವುದಾ ಲೋಕ

# ಸಂಶಯವೆ

ಸುಳಿಯದಿರು ಸಂಶಯವೆ
ನನ್ನವರ ಸನಿಹದಲಿ
ಬೆರಸದಿರು ವಿಷವನ್ನು ಅನ್ನದಲ್ಲಿ

ಬಾಳನಂದನ ವನವ
ತುಳಿದು ತೊತ್ತಳಗೈದು
ತುತ್ತದಿರು ಇದನಿನ್ನ ಒಡಲಿನಲ್ಲಿ

ನಿನ್ನ ರಾಕ್ಷಸ ಕೃತ್ಯ
ವಿಷಮತೆಗೆ ಮೊದಲಹುದು
ದೂರಸರಿ ಸುಳಿಯುವುದೆ ನೀನು ಇಲ್ಲಿ ?

ವಿಶ್ವಾಸವೆಂಬುವದು
ತತ್ತರಿಸಿ ಬೀಳುವದು
ಮುರಿಯದಿರು ಒಗೆಯದಿರು ಬಳ್ಳಿಚೆಲ್ಲಿ

ನಿನ್ನ ಕಾವಿಗೆ ಕಂದಿ
ಹೋಗುವದು ಕಗ್ಗನೇ
ಸ್ನೇಹಲತೆ ಸಾಕು, ಸರಿ, ದೇವರಾಣೆ

ನೀನು ಇದ್ದೆಡೆ ಮಸಣ
ಮರುಭೂಮಿ ನರಕವವೆ
ಬಾರದಿರು ತೊಳಗುತಿದೆ ಮನದ ಕೋಣೆ

## ವೇಣಿ ಪುಷ್ಪ

ದ್ವೇಷದುಸ್ವಾರ್ಥಕ್ಕೆ
ಕೋಪ ಮಾತ್ಸರ್ಯಕ್ಕೆ
ಹೀನ ಕೃತ್ಯಕ್ಕೆಲ್ಲ ನೀನೆ ಅನ್ನ
ದೇವ, ಕಾಯ್ ನನ್ನವರ
ಸಂಶಯದ ಬಲೆಯಿಂದ ।
ಬಡಿಸದಿರು ಉಣಿಸದಿರು ಹೀನ ಬನ್ನ



# ಬಾರೆ ಗೆಳತಿ

ಬಾರೆ ಗೆಳತಿ ಬಾರೆ
ಕೃಷ್ಣ ಬಂದ ನೀರೆ
ನಿನ್ನ ಮುಖವ ತೋರೆ
ಮನದ ಮಬ್ಬು ಜಾರೆ

ದಣಿದು ಬಂದ ರಂಗ
ಏಕೆ ಮನಕೆ ಭಂಗ
ಬಾರೆ ಬಾರೆ ಹೀಂಗ
ತಳುವಬೇಡ ಹಾಂಗ

ಕೊಳಲ ನುಡಿಸಲಾರ
ಜಾಣೆ ನೀನೆ ಬಾರ
ಆನನ ಹೃದಯ ಭಾರ
ಇಳಿಸೆ ನೀನೆ ಬಾರ

ಕಮಲ ಕಣ್ಣು ಬಾಡಿ
ನಿನ್ನನೆಲ್ಲು ನೋಡಿ
ದಣಿದಿರುವವೆ ಕಾಡಿ-
ದೆಯಲ ಬಾರೆ ಓಡಿ

ನಿಮ್ಮ ನಿಮ್ಮ ವಿರಸ
ಸೃಷ್ಟಿಗೆಲ್ಲ ವಿರಸ
ನಿಮ್ಮ ಪ್ರೇಮ ಸರಸ
ಸೃಷ್ಟಿಗೆಲ್ಲ ಹರುಷ

ಬಾರೆ ಗೆಳತಿ ಬಾರೆ
ಕೃಷ್ಣ ಬಂದ ನೀರೆ.

# ನಿಸರ್ಗ

ಮುಗಿಲ ನೀಲಿಯ ಬಣ್ಣ ಹಲವು ಹೂಗಳ ಬಣ್ಣ
ನಿಂತ ನೆಲದಾಸೊಬಗೊ ಹರಿವ ನೀರಿನ ಬೆಡಗೊ
ಒಂದೆರಡೆ ಸೌಭಾಗ್ಯ ನೋಡೆ ಸಾಲದು ಕಣ್ಣ
ಈ ವಿಶ್ವದೈಸಿರಿಯು ಮುಖಕೆಲ್ಲಿ ಇಹುದೆಡರೊ ?

ಸಿಡಿಲಾಗಿ ಗುಡುಗುವದು ನೀರೆಯೊಲು ಮೆರೆಯುವದು
ಭಕ್ತನೊಲು ಸಂತಸದಿ ಕುಣಿದಾಡಿ ನಲಿಯುವದು
ನಿತ್ಯ ನೂತನವಾಗಿ ಚಿತ್ತದಲಿ ಮೆರೆಯುವದು
ಎಂದಿಗಿದರಾಳವದು ಯಾರಿಂಗೆ ತಿಳಿಯುವದು ?

ವಿಶ್ವರೂಪವ ಕಂಡು ನಡುನಡುಗಿ ಬೀಳುತಿಹ
ಅರ್ಜುನನ ತೆರದಿನಾ ಓ ನಿಸರ್ಗವೆ ನಿನ್ನ
ರುದ್ರರೂಪವ ಕಂಡು ಕಂಪಿಸುವೆ ಹೊಳುತಿಹ
ಭೀಕರತೆಯನ್ನತ್ತ ನೂಕಿ ಮಾತೆಯೆ ಎನ್ನ

ಮನವನ್ನು ಸಂತೈಸು ರಾಮಣೀಯಕ ರೂಪ
ತೋರಿ ತೀಲಿಸು ತಾಯೆ ಕಳೆದೆನ್ನ ಈ ತಾಪ ||



## ಕೂಸು

ಬಾಳ ಬಳ್ಳಿ
ಬಿಟ್ಟ ಹೂವು
ಕೂಸು ಮುದುಮುದ್ದಿದೆ

ಜೀವ ಜೀವ
ಆತು ಓತು
ನೈಯ್ಯ ಮಾಟ ತಿದ್ದಿದೆ

ಮೋಹ ಮಮತೆ
ಕೂಡ ದಣಿದು
ದೇಹ ಜಾಲ ಹೆಣೆದಿದೆ

ಆಳುವ ನೋವ
ಕುಂದು ಕೊರತೆ
ಬಾಲರೂಪ ನೊಣೆದಿದೆ

ಬಲಿದು ಬೆಳೆದು
ನಲಿದು ಉಲಿದು
ಹೊಂದು ಫಲವ ಕುಸುಮವೆ

ಬಾಳು ಬಾಳ
ಕಾಳ ಕಳೆದು
ನಿನ್ನ ಏಳ್ಗೆ ಬಯಸುವೆ

---

# ತಂಗಿಗೆ

ನಿನ್ನ ಕಣ್ಣ ಹನಿ ನನ್ನ ಮನಕೊರೆದು
ತತ್ತರಿಸಿ ಬಿಡುವುದಮ್ಮ
ಬೇಡ ಹಾಕದಿರು, ತಡೆದು ಹಿಡಿತಾಯಿ
ಕಣ್ಣೀರ ಮುತ್ತನಮ್ಮ

ಒಂದ ಹೊಟ್ಟೆಯಲಿ ಹುಟ್ಟ ಬಹುದಿತ್ತು
ಎಂತೊ ತಪ್ಪಿತಕ್ಕ
ಆದರೇನು ನಾವಣ್ಣ ತಂಗಿಯರು
ಆಗಿ ಇರುವದಕ್ಕ

ಹುಟ್ಟಿನಲ್ಲೇನು ಇಹುದು ತಂಗಿ ಕೇಳ್
ವಾತ್ಸಲ್ಯದಲ್ಲಿ ತುಂಬ
ಮಧುರ ಬಾಂಧವ್ಯವಿರಲು ಕೊರಗೇಕೆ
ಎದೆಯಲ್ಲ ಜೇನಿಗಿಂಬ

ಕೊಳ್ಳು ಕುಸಿರೆಳ್ಳು ತಂಗಿ ಬಾಯಲ್ಲಿ
ಬಡ ಅಣ್ಣ ಕೊಟ್ಟನಿದನು
ಕಡಲಿನಲ್ಲಿ ಉಪ್ಪಲ್ಲದೇನಿನ್ನು
ತೊಡೆ ಕಣ್ಣ ನೀರನಿದನು

.........

# ಜೊತೆಗಿರುವ ಜೀವಕ್ಕೆ

ಕರುಣಾಳು ಸಂತತವು ಕಾಯ್ವಬೀಳಿಸನೆಮ್ಮ
ಏಕೆ ಹೆದರಿಕೆ ಒಂದು ತಪ್ಪಿಗಾಗಿ
ಹೆದರದಿರು ದಟ್ಟಡಿಯ, ಹಾಕುತ್ತ ಹೋಗೋಣ
ದೇವನಿರುವಾ ದಿವ್ಯ ತಾಣಕಾಗಿ

ಹಲವು ಹಂಬಲಗಳನು ಹೊರಹಾಕಿ ಎದೆಗೂಡ
ಹಸನಾಗಿ ಇಟ್ಟು ಸೊಗ ಉಣ್ಣೋಣಬಾ
ಒದೊಂದೆ ಮೆಟ್ಟಲವ ಮೇಲೇರಿ ಗುರಿಯನ್ನು
ಮುಟ್ಟೋಣ ಅಮೃತವನು ಕುಡಿಯೋಣಬಾ

ಜಾರಿ ವಿಶ್ವಾ ಮಿತ್ರ ತಪಗೈದು ಬ್ರಹ್ಮರ್ಷಿ
ತಾನಾಗಿ ಖ್ಯಾತಿಯನು ಪಡೆದನಲ್ಲ
ನಾನುಮಾಡಿದ ಕರ್ಮ ಬಲವಂತವಾಗುವದೇ ?
ನಾನಾಗಿಮಾಡುವದೆ ?.... ನೀನೆ ಎಲ್ಲ

ಎಂಬಮಾತನು ನಂಬಿ ಎಲ್ಲವನು ದಿವ್ಯನಿಗೆ
ನೈವೇದ್ಯ ಮಾಡೋಣ ಬಾರೆತಾಯಿ
ಸಾಧನೆಯ ಮಾರ್ಗದಲಿ ಜೊತೆಯಾಗಿ ಕೈಹಿಡಿದು
ಸಾಗೋಣ ಬಾ, ತಾಯಿ ಕಾಯೆ ಮಾಯಿ

—o—

# ಶ್ರೀಗುರುವಿನಡಿಗೆ

ಅಂದು ಏನು ಹೇಳಿದ್ದೆ ತಂದೆ ನೆನ-
ಪಿಹುದೆ ನಿನಗೆ ಮತ್ತೆ ?
ಕೈಯನೆಂದಿಗೂ ಬಿಡೆನು ಎಂದಿದ್ದೆ
ಮತ್ತೆ ಏಕೆ ಬಿಟ್ಟೆ ?

ದಿವ್ಯ ಜೀವನದ ಸಾಧನೆಗೆ ಎಂದು
ಬದ್ಧನಾಗಿ ಇದ್ದೆ
ಉನ್ಮಾದದೊಂದು ಅಮಲಿನಲಿ ಗುರುವೆ
ನೆಲಕುರುಳಿ ಹೊರಳಿ ಬಿದ್ದೆ

ವಿಷವ ನೆಕ್ಕಿ ಬದುಕಲಿಕೆ ಹೆಣಗಿದೆನು
ಕೈಯ ಪಿಡಿಯೊ ಗುರುವೆ
ಬೇಗ ಬದುಕಿಸೈ ದೀಪನಂದಲಿದ
ಭಕ್ತಕಲ್ಪತರುವೆ

ಹುಲ್ಲು ಕಡ್ಡಿಯನು ನಂಬಿಹೊಳೆಯನ್ನು
ಈಸಲೆಂದು ಬಗೆದು
ಬಿದ್ದೆ ತಿರುಗಣಿಗೆ ಎತ್ತು ಗುರುದೇವ
ನನ್ನ ಮೇಲೆ ತೆಗೆದು

—X—

# ಯಾಕೆ ?

ಯಾಕೆ ? ಎಂದೆ ಕೇಳ್ವರೆಲ್ಲ
ನೋವ ಮರೆಸರು
ಎಂತು ಎಂದು ಮೂಗಮೇಲೆ
ಬೆರಳನಿಡುವರು

ಗುರುವೆ ನೀನು ಮಾತ್ರ ಎನಿತು
ಕೇಳಲಿಲ್ಲವು
' ಪಾಪಿ , ಎಂದು ನಿನ್ನದಿಟ್ಟಿ
ತೊರೆಯಲಿಲ್ಲವು

ನಿನ್ನ ಮಮತೆ ನನ್ನ ಮೂಕ–
ನನ್ನು ಮಾಡಿದೆ
ಮನದ ಮುದುಡನೆಲ್ಲತಿದ್ದಿ
ರೂಪ ನೀಡಿದೆ

ಬರಲಿ ಬಿಡಲಿನೋವು ಗೆಲವು
ಸೌಖ್ಯವೆಲ್ಲವು
ಚಿಂತೆಗೈಯೆ ನಿನ್ನದೇನೆ
ನನ್ನದೆಲ್ಲವು



# ವಿಶ್ವೇಶ್ವರನ ಎದುರಿನಲ್ಲಿ

ಮೈ ತೊಳೆದು ಗಂಗೆಯಲಿ ಮನವೆಲ್ಲ ಮಡಿಯಾಗಿ
ಅವಕಾಶವೆಲ್ಲವನು ತುಂಬಿದರು ದೇಗುಲದಿ
ಸಾಕಾರನಾಗಿರುವ ವಿಶ್ವೇಶ ನಿನ್ನಡಿಗೆ
ಶರಣಾಗಿ ಬಂದಿಹುದು ಈ ಜೀವ ಈ ಬಾಳ
ನಿನ್ನಡಿಗೆ ಮುಡುಪಾಗಿ ನಿಲಿಸುವಂತಹ ಮನಸ
ನೀಡೆನಗೆ ಕಾರುಣ್ಯರೂಪನೇ! ತಾಮಸದ
ಕಜ್ಜಳವ ಕಳೆದೊಗೆದು ತ್ರಿಗುಣದಂಚನು ದಾಟಿ
ವಿಜ್ಞಾನದಾನಂದ ಸೀಮೆಯನು ಸೇರುವೊಲು
ರೂಪಿಸೈ ದಯೆಯಿಂದ ಭಗವಂತ ಬಲವಂತ!
ಅಬಲರಿಗೆ ಬಲವೀವೆ ನಿನಗೆಲ್ಲವೂ ಲೀಲೆ
ನೀ ಕೊಡಲು ನಿಂತಿರಲು ನಾನೇಕೆ ನಿರ್ಬಲನು?
ನನ್ನೆದೆಯ ಬಾನಿನೊಲು ಬಿತ್ತರಿಸಿ ಆತ್ಮದಲಿ
ವಾರಿಧಿಯ ಗಾಂಭೀರ್ಯವನು ತುಂಬಿ ಪರಮೇಶ
ದಿವ್ಯಕಜ್ಜಕ್ಕಾಗಿ ಕೈದುವೆನ್ನನು ಮಾಡು

—×—

# ಅಥೆಲೊ ನಾಟಕ ಓದಿ

ಬಾಳ ಬಣವೆಯು ಕೆಳಗೆ
ಮತ್ಸರದ ಕಿಡಿ ಹೊತ್ತಿ!
ಸುಟ್ಟು ಹಾಕುವುದಯ್ಯೊ!
ನಿರ್ಬುದ್ಧ ಕಿಡಿಗೇಡಿ
ದೌರ್ಜನಸ್ಯವು ಒಂದು
ಮಡಿಯುತಿದೆ ಸಂತತವು

ಆನಂದವನು ಕೆಡಿಸಿ
ಮನಸ್ಮಾನವನು ಬೆಳೆಸಿ
ಸೈತಾನ ನೃತ್ಯವನು
ಹಾಕುತಿದೆ ಧೀಂಕಿಟ್ಟು

ಋತವೆಲ್ಲ ಕಾಲ್ದೆಗೆದು
ಹಾಳಾಗಿ ಹೋಗುತಿದೆ

ದಿನದಿನಕು ಜೀವನದಿ
ವಿಷಮತೆಯು ಹೆಚ್ಚುತಿದೆ
ಸಂತಾಪತಾಪಗಳ
ಕೋಟಲೆಯ ಮಡುವಿನಲಿ
ನರನರಳಿ ಸಾಯುತಿವೆ
ನೂರಾರು ಜೀವಿಗಳು!

ಜಗವ ನಾಳುವಕ್ಕೆಯು
ನರವು ಸತ್ತಿಹುದೇನೊ
ಎಂಬ ಸಂಶಯದಿಂದ
ತತ್ತರಿಸುತಿದೆ ಬುದ್ಧಿ

ಕೊನೆಯು ಬರುವದೆ ಇಂಥ
ರಕ್ಕಸರ ಹೂಟಕ್ಕೆ ?
ಎಂದು ತಲೆತುರಿಸುವದೆ
ಉದ್ಯೋಗವಾಗಿಹುದು

ಮಾನವನ ಮಿದುಳಿಲ್ಲ
ಕೈಯ್ಯೂರಿ ನಿಂತಿಹುದು



# ಕರುಳ ಕೊರೆ

ಕಳವಳದ ಮೂರ್ತಿ ತಾ ಕಂಗೆಟ್ಟು ನಿಂತಿಹುದು
ತಳಮಳಕೆ ತೀರವೆಲ್ಲಿರುವದವಗೆ

ಹುಳುವು ಹುಪ್ಪಡಿಗಿಂತ ಕೀಳಾದಬಾಳುವೆಯು
ಅಳುತಬಾಳುತ್ತಿಹನು ಸಾವಬಯಸಿ

ಗೇಣು ಹೊಟ್ಟೆಯು ತುಂಬೆ ಬೊಟ್ಟು ಬಟ್ಟೆಯ ಹೊರೆಯೆ
ಪ್ರಾಣವನೆ ಒಪ್ಪಿಸಿಹ ಸಿರಿವಂತಗೆ

ಗಾಣದೊಳು ನೆಕ್ಕಿರುವ ಕಬ್ಬಿನೊಲು ಜಬ್ಬಾಗಿ
ತ್ರಾಣವೆಲ್ಲವ ಕಳೆದುಕೊಂಡಿರುವನು

ರೋಮರೋಮಗಳಲ್ಲಿ ತೂರಿ ಬರುತಿದೆ ನೋವು
ಭೂಮಂಡಲದಿ ಅವಗೆ ತಾಣವಿಲ್ಲ

ಸಾಮಗಾನದಿ ಶಾಂತಿದೇವತೆಯ ಕರೆಯುವರು
ಪ್ರೇಮವಿರಹಿತ ಪೃಥ್ವಿಗೆಲ್ಲಿ ಶಾಂತಿ ?

ಸತ್ತಿಹರು ಅಬ್ಬಾನು ಅಜ್ಜ ಜನ ನರಳುತ್ತ
ಬಿತ್ತಿಹರು ಜನಮನದಿ ಕ್ರಾಂತಿಬೀಜ

ಹೊತ್ತಲಿದೆ ಆರದದು ಎಂದಿಗೂ ಎಚ್ಚರವು
ನೆತ್ತಿಯಲಿ ಕಣ್ಣುಳ್ಳ ಧನದೊಡೆಯನೇ

ಮಾನವನೆ ನಿನೊಬ್ಬ ? ಮಾನವಗ ಮರುಕವನು
ನೀನರಿಯದಿಹೆಯಲ್ಲ ಕಲ್ಲೆದೆಯುವ

ಜನ್ನದಲಿ ಆಹುತಿಯ ಹಾಕುತಿರುವರು ಅವರು
ಧನ್ಯರಾಗುವರವರು ಸಿದ್ಧಿಯಲಿ

( ಮೈಕೆಲ್ ಆಂಜಲೊನ *Dying slave* ಎಂಬ ಚಿತ್ರ ನೋಡಿ )

---

# ಸತ್ಯ ಕಾಮ

"ಬಾರದಿರು ನಾನೂರು ಗೋವ್ರಗಳು ಸಂಖ್ಯೆಯಲಿ
ನಾಲ್ಕುಸಾವಿರವಾಗಿ ನಲಿದಾಡುತಿರುವತನಕ"
ಎಂಬ ಗುರುವಾಣಿಯನು ನಿನ್ನ ತಲೆಯಲಿಹೊತ್ತು
ಏಕೆಂದು ಏನೆಂದು ಮರುಮಾತನಾಡದೆಯೆ

ಧೇನುಗಳ ಮುಂಕೊಂಡು ಹಿಂದುಮುಂದಿಲ್ಲದೆಯೆ
ಗುರು ದೈವ ಸಮವೆಂದು ಅವನ ಒತ್ತಾಸೆಯಲಿ
ಅಚಲ ಶ್ರದ್ಧೆಯನಿಟ್ಟು ಸತ್ಯಕಾಮನು ಆಗಿ
ಪೂರ್ಣ ಸತ್ಯವನರಿದ ಹಿರಿದುಸಾಧಕ ನೀನು

ನಿನ್ನಬ್ಬೆ ಜಾಬಾಲಿ ಸಾಮಾನ್ಯದವಳಲ್ಲ
ನಿನ್ನ ಹೊತ್ತದರಿಂದ ಆಯ್ತವಳ ಗರ್ಭಶುಚಿ
ಸತ್ಯಕಾಮನು ಮೊದಲು ಸತ್ಯನಾಗಿರಬೇಕು
ಎಂದು ನುಡಿಯದೆ ನಡೆದು ತೋರಿಸಿದ ಋಷಿವರ್ಯ

ಋಷಿಮೂಲ ಅರಿಸುವದು ಹೊಲ್ಲವೆನುವದು ಇದಕೆ
ಸತ್ಯವನ್ನುಂಡುಣಿಸಿದವ ನೀನು ಹೀನನೇ ?

—o—

# ಪ್ರತಿಫಲ

ಇರುಳೆಲ್ಲ ಹಣ್ಣಾಗಿ ಬೆಳ್ದಿಂಗಳಾದಂತೆ
ಬೇಸಿಗೆಯ ಬಿಸಿ, ಬಾನಬಸಿರಿನಲ್ಲಿ
ಕಡಲೆದೆಯ ಉಪ್ಪುಂಡು ನೀರ ಮುತ್ತಾದಂತೆ
ಚಿಗುರೇಳುವೊಲು ಮಣ್ಣವಾಸಿನಲ್ಲಿ

ನಂಜಿದೆಯ ಆಳದಲಿ ಮಡಗಿದ್ದ ಕಾರುಣ್ಯ
ಝರಿಯೆದ್ದು ಮೇಲಕ್ಕೆ ಹರಿದಹಾಗೆ
ಹೂವಗಲ್ಲಕೆ ಸೂಜಿದುಟಿಯು ತಾಕಿರುವಾಗ
ಮಕರಂದ ಜೇನಾಗಿ ಬರುವಹಾಗೆ

ನೂರಾರು ನೋವುಗಳ ನಕ್ಕಿಸುತ ಜೀವನವ
ಮಧುರ ಮಧುವನು ಗೈವುದಾವಶಕ್ತಿ ?
ಕಳಚಿ ಬೀಳುತಲಿರಲು ಹಿಡಿದೆತ್ತಿನಡೆಸುವದು
ಬೇಕೇನು ಪ್ರತಿಫಲವು ? ಸಾಕು ಭಕ್ತಿ

........

# ಮಗುವಿನೊಡನೆ

ನೂರುಬಣ್ಣಗಳ ಉಟ್ಟುನಲಿಯುವವು
ಮೋಡ ಹೊಳೆಯುಹಳ್ಳ
ನಿನಗೆ ತಂದಿರಲು ಬಣ್ಣದಾಟಿಗೆಯ
ಅಲ್ಲವೇನು ಕಳ್ಳ
ಕಣ್ಣಸೆಳವ ಬಣ್ಣಗಳು ಹೂವ ಮೆರು–
ಗನ್ನು ಹೆಚ್ಚಿಸುವವು
ಏಕೆ ಎಂಬುದನು ಬಲ್ಲೆಬಾಳಣ್ಣ
ನಿನ್ನ ಮೆಚ್ಚಿಸುವವು

ನಿನ್ನ ಕುಣಿಸಲೆಂದಾನು ಹಾಡುತಿರೆ
ಅಲೆಗಳಲ್ಲಿ ಗಾನ
ತೇಲಿಬರುವದೋ ಗಾಳಿಯಲ್ಲಿ ಆ
ಮಧುರವಾದ ತಾನ
ನೆಲದ ಎದೆಯು ತಾನಕ್ಕೆ ನಲಿಯುವದು
ಅಲೆಯ ಗೀತ ಕೇಳಿ
ನನ್ನವನಿಗೆ ಜೊತೆಯಾಗಿ ನಡೆಯಲಿರೆ
ನಿನ್ನ ನೃತ್ಯಕೇಳಿ

ನಿನ್ನ ಚಾಚಿರುವ ಹರಹು ಅಂಗೈಗೆ
ಸವಿಯ ತಿನಸನಿಡಲು
ಹೂವು ಬಟ್ಟಲುಗಳಲ್ಲಿ ಒಟ್ಟೈಲಾ–
ಗುವದೊ ಜೇನ ಮಡಿಲು

ಏಕೆ ತನಿರಸವ ಹಣ್ಣು ಉಕ್ಕಿಸುವ-
ಜೆಂದು ಒಲ್ಲೆನಣ್ಣಾ
ನಿನ್ನ ಅಂಗೈಗೆ ತಿನಿಸನಿಟ್ಟಿರಲು
ನನ್ನ ಮುದ್ದು ಚಿಣ್ಣಾ

ಮುಗುಳುನಗೆಯು ಮೂಡಿಸಲು ನಿನ್ನ
ಮುಖದಲ್ಲಿ ಮುತ್ತನಿಡಲು
ಸೊಗಸನುಕ್ಕಿಸುತ ಅರುಣಕಿರಣಗಳು
ಬಹವು ಇರುಳಿನೊಡಲು

ಬಗೆದು ಒಲ್ಲೆನಾನಿನ್ನ ಮುಖದಲ್ಲಿ
ನಲಿದು ಮುತ್ತನಿಡಲು
ಮಧು ಮಂದಪವನ ತರುತಿರುವ ಸುಖವ
ಉಣ್ಣುವದು ನನ್ನ ಒಡಲು

.........

# ಗೋವರ್ಧನವನ್ನು ಕಂಡು

ಏಕೆ ಗೋವರ್ಧನವೆ ಹೆಬ್ಬಾವಿನಂದದಲಿ
ಮಬ್ಬಾಗಿ ಮಲಗಿರುವೆ ಚಿಂತೆಯಲ್ಲಿ
ಮೈಗೆ ಸರಿಯಿರದೇನು ? ಏಕೆ ಬಾಡಿಹೆ ಹೇಳು ?
ನೋವು ಮೂಡಿಪೆ ನಿನ್ನ ಗೆಲುಮೊಗದಲಿ

ಬಾಲ ಗೋಪಾಲಕರ ಕೆಳೆಯು ತಪ್ಪಿದುದೆಂದು
ನಿಡುಸುಯ್ದು ಸೊಪ್ಪಾಗಿ ಸೊರಗಿರುವೆಯಾ ?
ಗೋಪಲೀಲೆಯ ಕಾಂಬ ಸೌಭಾಗ್ಯವಿಲ್ಲೆಂದು
ಕಣ್ಮುಚ್ಚಿದುಗುಡದಲಿ ಒರಗಿರುವೆಯಾ

ಅಂದು ಮಥುರಾನಗರಕಾನಂದ ತಂದವನು
ಗೋವುಗಳ ವರ್ಧಿಸಿದ ಗೋವರ್ಧನ
ಹಳ್ಳಿ ಗೋಕುಲವಾಗಿ ಸೌಭಾಗ್ಯಹೊಂದಿತ್ತು
ಸೊಗವುಣಲು ಒಂದಿದ್ದ ಗೋವರ್ಧನ

ಅವನ ಕೊಳಲಿನ ದನಿಗೆ ನಿನ್ನ ಮೈಕಿವಿಯಾಯ್ತು
ಅಂದಿನಾ ಸೌಖ್ಯವನು ಹೇಳು! ಮೌನ
ಮುರಿದು ! ಗಿಡಮರವೆಲ್ಲ ಹುಚ್ಚೆದ್ದು ಕುಣಿದಾವು
ಕೇಳಿ ನೀಬಣ್ಣಿಸುವ ಆ ವಿತಾನ

ಎದೆಯಾಳದಲಿ ಬಿದ್ದ ಆಸೆ ಒಡಮುರಿದೇಳೆ
ಬಾಳು ನಂದನ ರೂಪತಾಳುವಂತೆ
ಹಸುರಿಸುವುದೊಂದೆ ತಡ ನೋಡು ನಿನ್ನಯ ಮೈಯು
ಮಥುರೆಯಾಗುವದಣ್ಣಾ ಮೊದಲಿನಂತೆ

ಗೋವುಗಳು ನಲಿದಾವು ಬಳ್ಳಿಗಳು ಪುದಿದಾವು
ಕಾನನದ ತುಂಬೆಲ್ಲ ಕಾಯಮಾನ
ನಿನ್ನ ಜಾಡ್ಯವು ಕಳೆಯೆ ಗಿರಿಧರನು ಬಂದಾನು
ನಿನ್ನೆದೆಯು ಉಂಡೀತು ಮುರಲಿಗಾನ



# ಅಹಲ್ಯೆ

ತಪ್ಪೊ ಒಪ್ಪೊ ಹೇಳ್ವುದೆಂತು ?
ಅಹಲ್ಯೆ ಜಾರಿಬಿದ್ದಳು
ಸುರಪ ಮತಿವಿಹೀನನಾದ
ಅಳಲಿನಲ್ಲಿ ಬಿದ್ದಳು

ಋಕ್ಷ ಜೀವನಕ್ಕೆ ನೊಂದ
ಕುವರಿ ಬಾಯಿ ತೆರೆದಳು
ಭೀರು ನೊಂದು ಬೆಂದು ಪಾಪ
ಶಕ್ರನೊಡನೆ ಬೆರೆತಳು

ಅತ್ತಳೇನು ಶಾಪಕವಳು ?
ನೊಂದಳಯ್ಯೊ ಪಾಪಕೆ
ಎದೆಯನೊಡೆದು ಬಿಟ್ಟಿತಕಟ
ಆವುದಣೆಯು ತಾಪಕೆ ?

ಅಡಿಯ ಮುಡಿಯು ನಡುಗಿಸಿತ್ತು
ಎದೆಯನೆಲ್ಲ ಉಡುಗಿಸಿ
ಹೊಂಚು ಹಾಕಿ ಒಂತು ಕಾಮ
ಅರಿವನೆಲ್ಲ ಅಡಗಿಸಿ

ಬಿದ್ದಹಲ್ಯೆ ಪುಣ್ಯವಂತೆ —
ರಾಮಪಾದಕೆದ್ದಳು
ಮುನಿದ ಪತಿಯ ಪೂಜ್ಯ ಚರಣ-
ಕಮಲದಲ್ಲಿ ಬಿದ್ದಳು

ತಪ್ಪೊ ! ಒಪ್ಪೊ ! ಹೇಳ್ವುದೆಂತು
ಅಹಲ್ಯೆ ಜಾರಿಬಿದ್ದಳು
ಪುಣ್ಯವಂತೆ ನೊಂದಳಯ್ಯೊ
ರಾಮಪಾದಕೆದ್ದಳು

—×—

# ಸೀತೆ

ಕೌಸಲ್ತಾಯಿ ವಂದನೆಯ ಮಹಿಳೆಯರ ಕಣ್ಮಣಿಯೆ
ತ್ಯಾಗದಿಂ ಜೀವನವ ನಂದನವ ಗೈದಿರುವೆ
ನಿನ್ನ ಮಂಗಲನಾಮ ಕೊಂಡಾನು ಮನದಣಿಯೆ !
ಬಾಳ ಮರದಲಿ ನೀನು ಫಲವಾಗಿ ಮಾಗಿರುವೆ
ನಿನ್ನ ಜೀವನವೊಂದು ತಪದ ರೂಪದೊಳಿಹುದು
ನಲುಮೆ ಒಲಮೆಗಳಿಂದ ನವನಾಕವಾಗಿಹುದು
ನರಕದಲಿ ನಿಂತರೂ ಅದನೆ ಸ್ವರ್ಗವಮಾಡಿ
ಹೆಗ್ಗುರಿಯ ಧ್ರುವದೆಡೆಗೆ ಬಾಳನ್ನು ಗುರಿಮಾಡಿ
ಹೆದರದೆಯೆ ಹೇಸಿಕೆಯನೆಲ್ಲಿದಾಟುತ ನಡೆದು
ಹೂವಯ್ಯ ನೆತ್ತರಕೆ ನೆನೆದ ಸೀತಾದೇವಿ
ನಿನ್ನ ಹೃದಯವ ಸತತ ಆ ವಿಧಿಯು ಕಡೆಕಡೆದು
ಬೇಸತ್ತಿತಲ ! ನಿನ್ನ ತಾಳ್ಮೆಯನು ಕಂಡೋವಿ
ಸಂತೈಸಿತಲ ! ವಿಧಿಯ ಗೆದ್ದ ಧೀರರ ಧೀರೆ
ನಡೆದಯಲ ಮೇಗಡೆಗೆ ಹೆಗ್ಗುರಿಯ ನೀಸಾರೆ



# ರುದ್ರಪ್ರಯಾಗ

ಬಂದೆಯಾ, ಮೋಹವೆಲ್ಲವನುಳಿದು ? ಇಲ್ಲದಿರೆ
ನಿಲ್ಲು ಈ ಗೆರೆದಾಂಟಿ, ಬಾರದಿರು ಬಾರದಿರು !
ಉತ್ತುಂಗ ಶಿಖರಕ್ಕೆ ಹುಲುಬಿಂಬಿ ನೆಗೆದಂತೆ
ನಿನ್ನಗತಿಯಾದೀತು ಎಚ್ಚರಿಕೆ ಎಚ್ಚರಿಕೆ
ಮದಮೋಹಗಳನೆಲ್ಲ ಹೆಣಮಾಡಿ ಸುಟ್ಟೊಗೆದು
ರಸವರ್ಜ್ಯ ನೀನಾಗಿ, ಎದೆಯುತಾಣವನೊಂದು
ರುದ್ರಭೂಮಿಯಮಾಡಿ ಆತ್ಮಶಿವನಾಗಲ್ಕೆ
ಹೆದರದೆಯೆ ಬಂದೊಡನೆ ಸಾಧ್ಯವಾಗುವದಲ್ತೆ ?
ಇಂತು ಶಿವದೀಕ್ಷೆಯನು ನೀಡಲ್ಕೆ ನಿಂತಿರುವ
ರುದ್ರಪ್ರಯಾಗವನು ಕಂಡು ಅಪರಾಪಕೃತಿ
ಕಾರುಸ್ವೈನ್ಯಕಂಡಂಜಿ ನಿಂತ ಉತ್ತರನಂತೆ
ತತ್ತರಿಸಿ ತಳಮುಳಿಸಿ ಕಳವಳಕೆ ತುತ್ತಾಯ್ತು
ಓ ಗುರುವೆ ಈ ಕ್ಲೈಬ್ಯವನ್ನು ನೀ ಕಳೆದೊಗೆದು
ನನ್ನ ಮೇಲೆತ್ತಯ್ಯ ಗತಿನೀಡು ಮಾರ್ಗದಲಿ

.........

# ಹೂವು

ಕರೆಯದಿರು ಕೈಮಾಡಿ ನನೆಸದಿರು ಕನಸಿನಲಿ
ನಿನ್ನ ದೃಷ್ಟಿಯು ಇತ್ತ ಸುಳಿಯದಿರಲಿ
ನನ್ನ ಒಲುಮೆಯ ನೀನು ಬಯಸದಿರು ಎಂದಿಗೂ
ಚಿತ್ತವಳಿಪನು ನನಗೆ ತಳೆಯದಿರಲಿ

ನಾನೊಂದು ನಿಷ್ಪಾಪಿ ಹೂವು ಸುಖದಿಂದಿರುವೆ
ದೃಷ್ಟಿ ತಾಕಿದರಾನು ಬಾಡಿಯೇನು
ಮುಟ್ಟಲೇತಕೆ ಮುಂದೆ ? ಬಾಳಲಾರೆನು ತುಂಬಿ
ಸೃಷ್ಟಿಗೀತೆಯನೆಂತು ಹಾಡಿಯೇನು

ಜನುಮವಿತ್ತನ ಪಾದ ಸೇರಲೆಂದೆಂಬಾಸೆ
ನನ್ನ ಪಾವಿತ್ರ್ಯವನು ಉಳಿಸು ಗುಂಗಿ
ಹುಡಿಯಲ್ಲಿ ಹೊರಳುವೊಲು ಮಾಡದಿರು ಕಾಡದಿರು
ಒಂದೆ ಅರೆನಿಮಿಷವನು ಇಲ್ಲಿ ತಂಗಿ

ನನ್ನ ಸೌಂದರ್ಯವದು ಈಶನಿಗೆ ಮೀಸಲಿದೆ
ನನ್ನ ಸೌರಭ್ಯವೂ ಅವನಿಗಾಗಿ
ಸುಮ್ಮನೇತಕೆ ಬಯಕೆ ? ಜಃರಿಸದಿರೆನ್ನನ್ನು
ಒಂದೆ ನಿಮಿಷದ ಅಧಮ ಸೌಖ್ಯಕಾಗಿ

ಮೊರೆಯದಿರು ಮನಸಿನಲಿ ಮರೆಯದಿರು ಮೆಲು ನುಡಿಯ
ಇ:ಲಿ ತುಂಬಿಯೆ ನಮ್ಮ ಸೋದರತನ
ಚ್ಯುತಿ ಬರದೆ ಸತ್ಯದಾ ಸಾಧನೆಯು ನಡೆದಿರಲಿ
ತುಂಬಿರಲಿ ಸಂತಸದಿ ನಮ್ಮೀ ಮನ

ದಾರಿತಪ್ಪುವ ಚಿಂತೆ ನನಗಿಲ್ಲ ಭಾರವನು
ಗುರುದೇವ ಹೊತ್ತಿರಲು ಓ ಸೋದರ
ಬೀಳಲಿರೆ ಹಿಡಿಯುವನು ಕೈಯಿಂದಲೆತ್ತುವನು
ಏತಕ್ಕೆ ಸಾಕಿನ್ನು ಈ ಕಾತರ



# ಬದರಿಕಾಶ್ರಮದಲ್ಲಿ ಒಂದು ಬೆಳಗು

ಕತ್ತಲೆಯ ಕಿಡಿಗೇಡಿತನ ಕಂಡು ಮುಖ ನೊಂದು
ದೇವಗಾನದಿ ಬೆಳಕ ತಂದವನೇನು ?
ಬೆಳಕೆ ದಾರಿಯತೋರು ಎಂಬ ಒಳದನಿ ಕೇಳಿ
ಸೂರ್ಯನಾರಾಯಣನು ಒಂದನೇನು ?

ತಾಮಸದ ಪಾಚಿಯನು ಎತ್ತಿಹಾಕಿದ ಹಾಗೆ
ಹಿಮಕೆ ಮುತ್ತಿದ ತಿಮಿರರಾಸಿಯನ್ನು
ಮಾಯಮಾಡಿದ ಅಬ್ಬ ! ಆದಿತ್ಯನವಗಾವು–
ದೀಡಹುದು ! ಕೇಳುವನೆ ಘನತಮವನು ?

ಭಕ್ತಿ ಹಣ್ಣಾದಂತೆ ಬೆಳಕು ಸೋರಿತು ಬುವಿಗೆ
ಹಿಮಕೆ ಎರೆದಿತು ಬೆಳೆಕುಜೇನು ತುಂಬ
ಜೀವಿಗಳನೆಬ್ಬಿಸಿತು "ಏಳಿ ಕಳೆದಿದೆ ಕಾಳು
ಬನ್ನಿ ತುಂಬಿಹುದೀಗ ಅಮೃತಕುಂಭ

ನಾರಾಯಣಾದ್ರಿಯಲಿ ಆತ್ಮಪ್ರಭೆಯನು ಕಂಡು
ಪೂರ್ವನರಗಿರಿ ಮಿಂಚಿ ಬೆಳಗುತಿಹುದು
ತನ್ನಲ್ಲಿ ಆ ಬಿಂಬದೈಸಿರಿಯನುಂಡುಂಡು
ಸಾರೂಪ್ಯ ಸೌಖ್ಯದಲಿ ತೊಳಗುತಿಹುದು

ಓ ! ದಿವ್ಯ ದೃಷ್ಟಿಯನು ತೆರೆದಾಗ ಪುಣ್ಯವೋ
ಪಾಪವೋ ಏನೆಲ್ಲ ಮಾಯವಾಗಿ
ಏಕಮೇವಂ ಆದ ದಿವ್ಯ ಪುರುಷನ ಇದಿರು
ಜೀವ ನಿಲುವದು ಬಾಗಿ ಭಕ್ತನಾಗಿ

ಪ್ರಕೃತಿಗೀಯಲು ನೆರವ ಕಾರುಣ್ಯದಲಿ ಪುರುಷ
ಅವಳ ಬಸಿರಲಿ ಬಹುದು ದಿವ್ಯಸೃಷ್ಟಿ
ಮಾಯೆಯಾವುದು ಇಲ್ಲಿ ಭಗವಂತನಾಟದಲಿ ?
ಸೀಡಿರಲು ನಮಗಾತ ಸತ್ಯದೃಷ್ಟಿ

ಬದರಿಕಾಶ್ರಮದಲ್ಲಿ ನೋಡಿದೆನು ಬೆಳಗಿನಲಿ
ಹಿಮಗಿರಿಯು ಬುದ್ಧನೊಲು ನಿಂತಿದ್ದಿತು
ನಿಸ್ಸೀಮವಾಗಿರುವ ಬಾನು ಬಯಲುಗಳಲ್ಲಿ
ಒಗೆವಕ್ಕಿ ಪಕ್ಕಗಳ ಕೆದರಿದ್ದಿತು



## ಬಾಳ ಸಂಪಿಗೆ

ಕರುಣೆಯೆ ಜೊನ್ನವಾಗಿ ತಾ
ಸುರಿವುದು ತುಂಬಲು ಇಳೆಯ ಅಂಗಳ
ಪಾವನಗೊಳಿಸಲೆಂದೇನೆ
ನಿಂತಿದೆ ಮೂರ್ತಿಯು ಪರಮಮಂಗಳ

ಮಳೆಬೆಳೆ ಎಲ್ಲ ಅವನ ದಯೆ
ರವಿಶಶಿ ಎಲ್ಲರು ಅವನ ರೂಪವು
ನಿಲಿಸುವ ನೆತ್ತಿ ವಿಶ್ವವವನು
ತಣಿವುದು ಜೀವಿಯ ಘೋರ ತಾಪವು

ದಿವ್ಯನು ಪರಮ ಪುರುಷನವ
ಆತನೆ ನಮ್ಮಯ ಬಾಳಿಗಾಸರ
ಆತನ ಕೃಪೆಯೆ ಕಾಯುವದು
ಎಲ್ಲರ ಯಾತಕೆ ಭಯವು ಬೇಸರ

ಸ್ಥೈರ್ಯವು ಚಿತ್ತದಲ್ಲಿರಲಿ
ಆತನ ಕೃಪೆಯಲಿ ಇರಲಿ ನಂಬಿಗೆ
ತಾಳ್ಮೆಯು ಕೈಯ ಹಿಡಿದಿರಲಿ
ನಲಿದರಳುವದಲ್ಲ ಬಾಳ ಸಂಪಿಗೆ



# ಗುರುದೇವ

ತಾಳಬೇಕು ಬಾಳಬೇಕು ದೇವಚಿತ್ತ ಎಲ್ಲವು
ದುಃಖವೇಕೆ ಬದುಕಿನಲ್ಲಿ ದೇವಲೀಲೆ ಎಲ್ಲವು
ನಿಂದೆ ಏಕೆ ?; ನಿಂದ್ಯವೆಲ್ಲಿ ? ಮಾತೃಸೃಷ್ಟಿ ಎಲ್ಲವು
ಈ ವಿಶಾಲ ವಿಶ್ವವೆಲ್ಲ ಅವನೆ ಬೇರೆ ಇಲ್ಲವು
" ಭಕ್ತಿ ಬೇಕು " " ಒಳಿತು ಆಗು, ಸಾಕು ನುಡಿ, ಕುಡಿ
ದಿವ್ಯನಾಮದಮೃತ " " ದ್ವೈತ ಸತ್ಯ " " ನೀದುಡಿ
ದೇವದಾಸನಾಗಿ; ಜಗಳ ಬೇಡ !" " ನಾನೇ ದೇವನು "
" ಸಾಧನೆಯನುಮಾಡು ನಿತ್ಯ ಪಡೆವೆ ಮೆಟ್ಟಿಸಾವನು
ಹಸುಳೆ ಹಾಲು ಎದೆಯ ಹಾಗೆ ಇರಲಿ ಅಂತರಂಗವು
ಬಾಳ ಹಗರಣಂಗಳಲ್ಲಿ ಇರಲಿ ದೇವಸಂಗವು
ಸಾಗು ನಿತ್ಯ ಸತ್ಯದೆಡೆಗೆ ಹಿಂದೆ ಅಡಿಯ ಕಿತ್ತದೆ
ದೃಢತೆಧೈರ್ಯ ಸಾಕು ಸಾಧಕನಿಗೆ ಧನವು ಸುತ್ತದೆ "
ನಿನ್ನವಾಣಿ ನೊಂದ ಜೀವಿಗಳಲಿ ಬಲವ ತುಂಬಿದೆ
ಪರಮಹಂಸ ದಿಕ್ಕುಗೆಟ್ಟು ನಿನ್ನಮಾತ ನಂಬಿದೆ

---

# ಶ್ರೀ ಜಯದೇವಿ ತಾಯಿಯವರಿಗೆ

ಕನ್ನಡದ ಸಿರಿದೇವಿ ಅನುಭಾವಿ ಮಾದೇವಿ
ಕನ್ನಡದ ದುಸ್ಥಿತಿಯ ಕಂಡು ಕಳವಳಗೊಂಡು
ಮೈಮರೆದು ಮಲಗಿರುವ ಮಹಿಳೆಯರ, ವಿಸ್ಮರಣ-
ಸಾಗರದಿ ಮುಳುಮುಳುಗಿ ತೊಳಲುತಿಹ ಪುರುಷರನು
ಎಚ್ಚರಿಸಿ ಮತ್ತೆ ಕನ್ನಡ ತಾಯ ಐಸಿರಿಯ
ಸವಣಿಸಲು ಹೊಂದಿಸಲು ತಲೆಯೆತ್ತಿ ಮೆರೆಯಿಸಲು
ಕೈಲಾಸವನು ತೊರೆದು ಶಿವಲಿಂಗದೈಕ್ಯವನು
ಮನವಾರೆ ಬಿಟ್ಟಳಿದು ಬಂದಳೆನ್ನುವ ರೀತಿ
ಶಿವಸಿದ್ಧರಾಮನೂ ತನ್ನ ತಪದೆರವಿತ್ತ
ಬಸವಣ್ಣ ತನ್ನ ಘನಮನದ ಭಕುತಿಯನಿತ್ತ
ಪಾರ್ವತಿಯು ಕಣ್ದೆರೆದು ಬಾಯ್ತುಂಬ ಹರಸಿದಳು
ಶಿವನಿತ್ತ ತನ್ನ ಮಹ ವರದ ಹಸ್ತವನಾಗ
ಎಂಬ ರೀತಿಯೊಳೀಗ ಕನ್ನಡದ ನಾಡಿನಲಿ
ಕೀರ್ತಿಯಲಿ ಜಯದೇವಿ ಮಾತಾಯಿ ಎಸೆಯುವಳು

.........

## ಸಿದ್ಧರಾಮುನಿಗೆ

ಸಿದ್ಧನಿವ ಸಿದ್ಧನಿವ
ಸಾಧನೆಯ ಗರ್ಭದಿಂ
ಸಿದ್ಧಿಯನು ಪಡೆದ ಶ್ರೀ ಸಿದ್ಧನಿವನು।
ಅಂದು ನಾಡಾಗಿರಲು
ಸಂದೇಹದಾಬಿಡು
ಸಂದೇಹ ನೀಗಿಸಲು ಬಂದ ನಿವನು

ಗೊಂದಲದಿ ಬಿದ್ದವರ
ತಂದೆ, ಕೈ ಹಿಡಿದೆತ್ತಿ
ಮುಂದಕ್ಕೆ ಕರೆತಂದು ಮೇಲೆತ್ತಿದೆ।
ನೂರೆಂಟು ಹೀನಗಳ
ದೂರ ಮಾಡಿದ ಧೀರ
ಬಾರಯ್ಯ, ಒಂದಿಹುದು ಮೊದಲ ಗತಿಯು

ನಿನ್ನ ಕರುಣೆಯೆ ಸಾಕು
ನನ್ನಿ ಪತಿತರ ನೆತ್ತೆ
ಇನ್ನೇನು, ಮಾಡಯ್ಯ ನಿನ್ನ ಮನಸು
ಏಕೆ ? ಬೆಸರ ಗರುವೆ ?
ನೀ ಕರುಣೆ ತೋಳೆಯದಿರೆ
ಮಾಕರಸಿ, ಗುರುದೇವ ಬೇರೆ ಯಾರು ?

# ಭಾಗೀರಥಿ

ಹೆಣ್ಣು ಬಾಳ್ ಕಣ್ಣೀರು ಎಂದು ಹೇಳುವರೆಲ್ಲ
ಆದರೇಂ ಕಣ್ಣೀರನೊರೆಸುವವರಾರಿಲ್ಲ
ಮುಳ್ಳು ಬೇಲಿಯೊಳೆಲ್ಲ ಹೂಮಾಲೆ ಎಳೆದಂತೆ
ಬಾಳ ಸಾಗಿಸುವವರ ಕಂಡರೂ ಏನಂತೆ ?
ಮರುಕವೊಂದಿನಿತಿಲ್ಲ ! ಮಾತು ಗಾಳಿಯಲಾಯ್ತು
ಒಡಹೆಣ್ಗೆ ಈ ಬಯಲು ನೈರಾಶ್ಯಗತಿಯಾಯ್ತು
ಹುಣ್ಗೆ ಒರೆಎಳೆದಂತೆ ಅಪಹಾಸ್ಯ ಹಿರಿದಾಯ್ತು
ಪೂಜ್ಯನಾರಿಗೆ ನರಕ ಬಾಳನ್ನು ಕೊಟ್ಟಾಯ್ತು

ಇದಕಂಡು ಕನಿಕರದಿ, ಸಗರ ಸಂತತಿಯನ್ನು
ಎತ್ತಬಂದಾ ಧೀರೆ ಗಂಗೆಯೊಲು ಕನ್ನಡದಿ
ಬಂದ ಭಾಗೀರಥಿಯೆ ಬಾಳಿನಲಿ ಮುನ್ನಡೆದೆ
ತೆಗಳುವವರನು ಕಂಡು ಕುಗ್ಗದೆಯೆ ನಿನ್ನನ್ನು,
ಅಪವಾದ ಅಪಮಾನಗಳನೆಲ್ಲಸಹಿಸುತ್ತ !
ಗೆಲುವಿರಲಿ ಶ್ರೀಮಾತೆ ಸಿಂತಿಹಳು ಹರಿಸುತ್ತ !

........

# ಬೆಳ್ಳಿಗೆ

ಮೂಡದಿಸೆಯಲಿ ಮುಗುಳಿನಂದದಿ
ಅರಳಲಿಹ ಚೆಲು ಬೆಳ್ಳಿಯೆ
ಯಾವ ಸಿದ್ಧಿಗೆ ಯಾವ ಧ್ಯಾನದಿ
ಮಗ್ನಳಾಗಿಹೆ ಕಳ್ಳಿಯೆ

ಯಾವ ವೃತವಿದು ಏನು ನಿಯಮವು ?
ಹೇಳಬಾರದೆ ಗೆಳತಿಯೆ ?
ನಿನ್ನ ಶಾಂತಿಯು ನನಗೆ ಬೇಕಿದೆ
ಒಣದು ಬಾಳಲಿ ಬಳಲಿಹೆ

ಬೆರಳನೆಣಿಸಿದರೇನು ಕರುಳಿಗೆ
ಕಣ್ಣು ಒಡೆಯದೆ ನಿಂತಿಹೆ
ಎದೆಗೆ ಯಾವದೊ ಭಾರ ಬಿದ್ದಿದೆ
ನನ್ನ ಗತಿಯೋ ಇಂತಿದೆ

ನೀನು ಜೀವನಕಲೆಯನರಿತಿಹೆ
ನಿನ್ನ ಭಾಗ್ಯವೆ ಭಾಗ್ಯವು
ನಿನ್ನ ತಪಕಿದೆ ಸಿದ್ಧಿ ನನಗೋ
ಇಲ್ಲ ಮನಕಾರೋಗ್ಯವು

ನೀಡು ಸಂದೇಶವನು ಬೆಳ್ಳಿಯೆ
ಬೇಡಿಕೊಳ್ಳುವೆ ! ಎನ್ನನು
ದಿವ್ಯದೀಕ್ಷೆಯ ನೀಡಿ ಒಯ್ವೆಯ
ನಂಬಿ ನಿಂತಿಹೆ ನಿನ್ನನು

# ಪ್ರಾರ್ಥನೆ

ಒತ್ತಿಬಹ ಕಷ್ಟಗಳನೆಲ್ಲ ಹಿಂದಿಕ್ಕಿಂದು
ಸೌಖ್ಯಸಾಗರದಲ್ಲಿ ಮೀಯಿಸೆ ದು
ಬೇಡಿಕೊಳ್ಳುವದಿಲ್ಲ ಎದುರಿಸುವ ಧೈರ್ಯವನು
ನೀಡೆಂದು ಬೇಡುವೆನು ಕರುಣಾಸಿಂಧು

ನೋವುಗಳ ಮುಳ್ಳುಗಳು ಎದೆಗೆ ಚುಚ್ಚುತಲಿರಲು
ತೆಗೆಯೆಂದು ಬೇಡುವೆನೆ ಓ ಅನಂತ
ತಡೆದುಕೊಳ್ಳುವ ಕಸುವ ನನ್ನ ಹೃದಯಕೆ ನೀಡು
ಮತ್ತೇನು ಬೇಕೆನಗೆ ಪ್ರೇಮವಂತ ?

ಬಾಳ ಕೋಲಾಹಲದಿ ಹೆರರ ತೋಳಾಸರಕೆ
ಬಾಯಿತೆರೆಯುವಹಾಗೆ ಮಾಡಬೇಡ
ನನ್ನ ಸಾಮರ್ಥ್ಯವನು ನಂಬಿ ಮುಂದರಿಯುವಾ
ಆತ್ಮವಿಶ್ವಾಸವನು ನನಗೆ ನೀಡ

" ಉಳಿಸು ಉಳಿಸೈ " ನನ್ನ ಎಂಬ ಕನವರಿಕೆಯಲಿ
ಮುಳುಗದಿರಲೈ ದೀನವಾಗಿ ಬಾಸೆ
ಗೆಲ್ಲುವೆನು ನನ್ನಾತ್ಮ ಸ್ವಾತಂತ್ರ್ಯವನು ಎಂದು
ತಾಳ್ಮೆಯಿಂದಲಿ ಬುಡಿಯುತಿರಲಿ ಆಸೆ

ದಿವ್ಯವಾಗಿಹ ನಿನ್ನ ಕಾರುಣ್ಯದನುಭೂತಿ
ಓ ತಂದೆ, ಗೆಲುವಿನಲಿ ಮಾತ್ರಸಾಕೆ?
ಮಾಡದಿರು ಹೇಡಿಯನು! ನಿನ್ನ ಕರುಣೆಯ ಸುಖವು
ಸೋಲಿನಲ್ಲಿಯು ಕೂಡ ಬೇಡ ಯಾಕೆ?

—×—

**ಸೂಚನೆ** :- ಮುದ್ರಣದ ಕಾರ್ಯ ತೀರ ಅವಸರದಲ್ಲಿ ನಡೆದುದರಿಂದ ಮುದ್ರಣ ದೋಷಗಳುಳಿದಿವೆ. ವಾಚಕರು ಕ್ಷಮಿಸಿ ತಪ್ಪು ತಿದ್ದಿಕೊಂಡು ಓದಬೇಕಾಗಿ ವಿನಂತಿ.

## ತಪ್ಪು—ಒಪ್ಪು

| ಪುಟ | ಚರಣ | ತಪ್ಪು | ಒಪ್ಪು |
|---|---|---|---|
| ೧೧ | ೭ | ಒದೊಂದೆ | ಒಂದೊಂದೆ |
| ೧೭ | ೭ | ನೆಕ್ಕಿರುವ | ಸಿಕ್ಕಿರುವ |
| ೧೭ | ೧೩ | ಅಜ್ಜ | ಅಜ್ಜ |
| ೧೮ | ೪ | ಸಿದ್ಧಿಯಲಿ | ಸಿದ್ಧಿಯಲ್ಲಿ |
| ೧೯ | ೨ | ನಲಿದಾಡುತಿರುನತನಕ | ನಲಿದಾಡುತಿರುವನಕ |
| ೧೯ | ೧೩ | ಅರಿಸುವದು | ಅರಸುವದು |
| ೨೦ | ತಲೆಕಟ್ಟು | ಪ್ರಶಿಫಲ | ಪ್ರತಿಫಲ |
| ೨೧ | ೧೦ | ಅಲೆಗಳಲ್ಲಿ | ಎಲೆಗಳಲ್ಲಿ |
| ೨೫ | ೧೨ | ಮಡಿಯ | ಮುಡಿಯ |
| ೨೭ | ೯ | ಹೇಸಿಕೆಯನೆಲ್ಲಿ | ಹೇಸಿಕೆಯನೆಲ್ಲ |
| ೨೮ | ೧೧ | ಪಕೃತಿ | ಪ್ರಕೃತಿ |
| ೩೩ | ೮ | ವಿಶ್ವವವನು | ವಿಶ್ವವನು |
| ೩೬ | ೫ | ಬಿಡು | ಬೀಡು |
| ೩೬ | ೧೬ | ಬೇಸರ | ಬೇಸರ |
| ೩೬ | ೧೬ | ಗರುವೆ | ಗುರುವೆ |
| ೩೯ | ೨ | ಮೀಯಿಸೆದು | ಮೀಯಿಸೆಂದು |

